# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 551
ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ
ಉತ್ತರಿಸಬೇಕಾದ ಸಚಿವರು : ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 18-07-2019

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಸರ್ಕಾರದ ಸಾರಿಗೆ ಇಲಾಖೆಯ ಅಧೀನದಲ್ಲಿರುವ ಎಲೆಕ್ಟ್ರಾನಿಕ್ ಸಿಟಿ ಪ್ರಾದೇಶಿಕ ಸಾರಿಗೆ ಅಧಿಕಾರಿಯ ಕಛೇರಿ, ಬೆಂಗಳೂರು ಇಲ್ಲಿ ಜನವರಿ 2015 ರಿಂದ ಮಾರ್ಚ್ 2015ರವರೆಗೆ ನಾಲ್ಕು ಚಕ್ರದ ಭಾರತ್-3ರ ವಾಯುಮಾಲಿನ್ಯದ ಗುಣಮಟ್ಟ ಹೊಂದಿದ ವಾಹನಗಳ ನೋಂದಣಿಯಾದ ಸಂಖ್ಯೆ ಎಷ್ಟು? | ಪ್ರಾದೇಶಿಕ ಸಾರಿಗೆ ಅಧಿಕಾರಿ, ಎಲೆಕ್ಟ್ರಾನಿಕ್ ಸಿಟಿ ಕಛೇರಿಯಲ್ಲಿ ಜನವರಿ 2015 ರಿಂದ ಮಾರ್ಚ್ 2015ರ ವರೆಗೆ ನಾಲ್ಕು ಚಕ್ರದ ಭಾರತ್-03ರ ವಾಯುಮಾಲಿನ್ಯದ ಗುಣಮಟ್ಟ ಹೊಂದಿದ 518 ವಾಹನಗಳನ್ನು ನೋಂದಾಯಿಸಲಾಗಿರುತ್ತದೆ. |
| ಆ | ಸದರಿ ಅವಧಿಯಲ್ಲಿ ಕಛೇರಿಯಲ್ಲಿ ಅಧಿಕಾರಿಯಾಗಿ ಕರ್ತವ್ಯ ನಿರತರಾಗಿದ್ದ ಪ್ರಾದೇಶಿಕ ಸಾರಿಗೆ ಅಧಿಕಾರಿಯ ಪೂರ್ಣ ವಿವರ ನೀಡುವುದು? | ಶ್ರೀ ಸಿ. ಮಲ್ಲಿಕಾರ್ಜುನ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು. |
| ಇ | ಸರ್ಕಾರಿ ಅಧಿಸೂಚನೆ ಸಂ; ಜಿ.ಎಸ್.ಆರ್. 84(ಇ) ದಿನಾಂಕ: 09-02-2009ರಲ್ಲಿ ತಿಳಿಸಿರುವಂತೆ ದಿನಾಂಕ: 01-04-2010ರ ನಂತರ ನಾಲ್ಕು ಚಕ್ರದ ವಾಹನದ ನೋಂದಣಿ ವೇಳೆ ಅದರ ವಾಯು ಮಾಲಿನ್ಯದ ಗುಣಮಟ್ಟ ಭಾರತ್-04ರ ಮಾನದಂಡದಂತೆ ಇರಬೇಕೆಂದು ತಿಳಿಸಲಾಗಿದ್ದು, ಈ ನಿಯಮಾವಳಿಯನ್ನು ಪಾಲಿಸದೇ ಭಾರತ್-03ರ ವಾಯು ಮಾಲಿನ್ಯದ ಗುಣಮಟ್ಟದ ನಾಲ್ಕು ಚಕ್ರದ ವಾಹನ ನೋಂದಣಿ ಮಾಡಿದ ಅಧಿಕಾರಿ ಮೇಲೆ ಏನು ಕ್ರಮ ಜರುಗಿಸಲಾಗುವುದು? | ಕೇಂದ್ರ ಸರ್ಕಾರದ ಅಧಿಸೂಚನೆ ಸಂಖ್ಯೆ; ಜಿ.ಎಸ್.ಆರ್ 84(ಇ), ದಿನಾಂಕ: 09-02-2009ರಲ್ಲಿ ಅನುಕ್ರಮ ಸಂಖ್ಯೆ 2(ಸಿ)ರಲ್ಲಿ ಈ ಕೆಳಕಂಡಂತೆ ವ್ಯಾಖ್ಯಾನಿಸಲಾಗಿದೆ:-<br>2(ಸಿ):- after sub rule (14) the following sub-rule shall be inserted with effect from the 1st day of April, 2010 namely:-<br>15) Mass Emission Standards (Bharath Stage IV) for M and N Catergory vehicles:-<br>a) the Mass Emission Standards for Bharath Stage IV shall come into force in the National Capital Region and the cities of Mumbai, Kolkata, Chennai, Bangalore, Hyderbad including Secunderabad, Ahmedabad, Pune Surat, Kanpur and Agra in respect of |

| | | |
|---|---|---|
| | | four-wheeled vehicles manufactured on or after the 1st April, 2010 except the four-wheeled transport vehicles plying on Inter-State permits or National permits or All India Tourist Permits, within the jurisdiction of these cities.<br><br>ಪ್ರಾದೇಶಿಕ ಸಾರಿಗೆ ಕಛೇರಿ, ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು ಕಛೇರಿಯು ಬೆಂಗಳೂರು ಗ್ರಾಮಾಂತರ ಹಾಗೂ ನಗರ ಪ್ರದೇಶಗಳ ಕಾರ್ಯ ವ್ಯಾಪ್ತಿಗೆ ಬಂದಿರುವುದರಿಂದ, ಕೇಂದ್ರ ಸರ್ಕಾರದ ಅಧಿಸೂಚನೆಯಂತೆ ವಾಹನಗಳ ನೋಂದಣಿಯನ್ನು ಮಾಡಲಾಗಿರುತ್ತದೆ. |
| ಈ | ಭಾರತ್-03ರ ವಾಯು ಮಾಲಿನ್ಯದ ನಾಲ್ಕು ಚಕ್ರದ ವಾಹನ ನೋಂದಣಿಯಾಗಿದ್ದು, ಇಂತಹ ವಾಹನದ ಉಪಯೋಗದಿಂದ ಬೆಂಗಳೂರು ನಗರದಲ್ಲಿ ಆಗಿರುವ ವಾಯು ಮಾಲಿನ್ಯದ ಬಗ್ಗೆ ಸರ್ಕಾರಕ್ಕೆ ಅರಿವು ಇದೆಯೇ? | ಕೇಂದ್ರ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 115(7) ಪ್ರಕಾರ ಯಾವುದೇ ವಾಹನವು ಹೊಸದಾಗಿ ನೋಂದಣಿಯಾದ ಒಂದು ವರ್ಷದ ತರುವಾಯ ಪ್ರತಿ 6 ತಿಂಗಳಿಗೊಮ್ಮೆ ಅನುಮೋದಿತ ವಾಯು ಮಾಲಿನ್ಯ ತಪಾಸಣಾ ಕೇಂದ್ರದಲ್ಲಿ ಮಾಲಿನ್ಯ ನಿಯಂತ್ರಣ ಪ್ರಮಾಣ ಪತ್ರ ಹೊಂದುವುದು ಕಡ್ಡಾಯವಾಗಿದ್ದು, ಬಾರತ್ ಸ್ಟೇಜ್-4 ವಾಹನಗಳು ನೋಂದಣಿಯಾದ ಒಂದು ವರ್ಷದ ತರುವಾಯ ಪ್ರತಿ 12 ತಿಂಗಳಿಗೊಮ್ಮೆ ಮಾಲಿನ್ಯ ನಿಯಂತ್ರಣ ಪ್ರಮಾಣ ಪತ್ರ ಹೊಂದುವುದು ಕಡ್ಡಾಯವಾಗಿರುತ್ತದೆ. ಆದ್ದರಿಂದ, ವಾಹನಗಳ ತಪಾಸಣಾ ವೇಳೆಯಲ್ಲಿ ಈ ಬಗ್ಗೆ ಪರಿಶೀಲಿಸಿ, ನಿಯಮಬಾಹಿರವಾಗಿ ಸಂಚರಿಸುವ ವಾಹನಗಳ ವಿರುದ್ಧ ಪ್ರಕರಣಗಳನ್ನು ದಾಖಲಿಸಿ ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. ಸದರಿ ತಪಾಸಣಾ ಕಾರ್ಯವು ನಿರಂತರವಾಗಿ ಜಾರಿಯಲ್ಲಿದೆ. |

ಸಂಖ್ಯೆ: ಟಿಡಿ 14 ಟಿಡಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು